# ಕರ್ನಾಟಕ ವಿಧಾನ ಪರಿಷತ್ತು

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 1266

ಸದಸ್ಯರ ಹೆಸರು : ಶ್ರೀ ಕೆ.ಎ. ತಿಪ್ಪೇಸ್ವಾಮಿ (ನಾಮ ನಿರ್ದೇಶನ ಹೊಂದಿದವರು

ಉತ್ತರಿಸುವ ದಿನಾಂಕ : 24.12.2021

ಉತ್ತರಿಸುವ ಸಚಿವರು : ಕೃಷಿ ಸಚಿವರು

| ಕ್ರ.ಸಂ | ಪ್ರಶ್ನೆ | ಉತ್ತರ |
| --- | --- | --- |
| ಅ) | ಸರ್ಕಾರವು 2021-22ನೇ ಆಯ-ವ್ಯಯದಲ್ಲಿ ರೈತರು ಆಧುನಿಕ ಕೃಷಿ ಪದ್ಧತಿ ಅಳವಡಿಸಿಕೊಳ್ಳಲು ಅಗತ್ಯವಿರುವ ಆಧುನಿಕ ಕೃಷಿ ಹಾಗೂ ಕೊಯ್ಲೋತ್ತರ ಯಂತ್ರೋಪಕರಣ ಗಳನ್ನು ಒದಗಿಸುವುದಾಗಿ ಮತ್ತು ವಿವಿಧ ಕೃಷಿ ಬೆಳೆಗಳನ್ನು ಒಕ್ಕಲು ಮಾಡಲು ಕಂಬೈನ್ಡ್ ಹಾರ್ವೆಸ್ಟರ್ ಗಳನ್ನು ಪೂರೈಸುವುದಾಗಿ ಘೋಷಿಸಿದ್ದು, ಈ ಉಭಯ ಕಾರ್ಯಕ್ರಮಗಳ ಅನುಷ್ಠಾನ ಮಾಡಲು ಇಲಾಖೆಗಳಿಗೆ ಒದಗಿಸಿರುವ ಅನುದಾನ ಎಷ್ಟು ಮತ್ತು ಬಳಕೆಯಾಗಿರುವ ಅನುದಾನವೆಷ್ಟು; (ಜಿಲ್ಲಾ ವಾರು ಮತ್ತು ತಾಲ್ಲೂಕುವಾರು ಪೂರ್ಣ ವಿವರ ನೀಡುವುದು) | ರೈತರು ಮಿತವ್ಯಯದಲ್ಲಿ ಆಧುನಿಕ ಕೃಷಿ ಪದ್ಧತಿ ಅಳವಡಿಕೊಳ್ಳಲು ನೆರವಾಗುವಂತೆ ಹಾಗೂ ಅವಶ್ಯವಿರುವ ಆಧುನಿಕ ಕೃಷಿ ಹಾಗೂ ಕೊಯ್ಲೋತ್ತರ ಯಂತ್ರೋಪಕರಣ ಗಳನ್ನು ಮತ್ತು ಬೆಳೆಗಳನ್ನು ಒಕ್ಕಲು ಮಾಡಲು ಕಂಬೈನ್ಡ್ ಹಾರ್ವೆಸ್ಟರ್ ಗಳನ್ನು ಕೃಷಿ ಯಂತ್ರಧಾರೆ ಕೇಂದ್ರಗಳಲ್ಲಿ ದಾಸ್ತಾನು ಮಾಡುವ ಮೂಲಕ ಕೃಷಿ ಯಂತ್ರಧಾರೆ ಕೇಂದ್ರಗಳನ್ನು ಬಲವರ್ಧನೆ ಮಾಡುವ ನಿಟ್ಟಿನಲ್ಲಿ ಪ್ರಸಕ್ತ ಸಾಲಿನ ಆಯವ್ಯಯದಲ್ಲಿ ಘೋಷಣೆ ಮಾಡಲಾಗಿರುತ್ತದೆ. ಈ ನಿಟ್ಟಿನಲ್ಲಿ ಕೃಷಿ ಯಂತ್ರಧಾರೆ ಕೇಂದ್ರಗಳನ್ನು ಬಲವರ್ಧನೆಗೊಳಿಸಿ ರೈತರಿಗೆ ಸಕಾಲದಲ್ಲಿ ಬೇಡಿಕೆಗೆ ಅನುಗುಣವಾಗಿ ಅತ್ಯಾಧುನಿಕ ಕೃಷಿ ಯಂತ್ರೋಪಕರಣಗಳನ್ನು ಒದಗಿಸುವ ಸಲುವಾಗಿ ಬೇಕಾಗುವ ಅನುದಾನಕ್ಕಾಗಿ ಆರ್ಥಿಕ ಇಲಾಖೆಗೆ ಪ್ರಸ್ತಾವನೆ ಸಲ್ಲಿಸಲಾಗಿದ್ದು ಪರಿಶೀಲನಾ ಹಂತದಲ್ಲಿರುತ್ತದೆ. |
| ಆ) | ಅದೇ ರೀತಿ ಯಾಂತ್ರೀಕರಣ ಯೋಜನೆಯಡಿ ಸಣ್ಣ ಟ್ರ್ಯಾಕ್ಟರ್ ಗಳಿಗೆ ನೀಡುತ್ತಿದ್ದ ಸಹಾಯಧನವನ್ನು 25-45PTO HP ಟ್ರ್ಯಾಕ್ಟರ್‌ಗಳಿಗೂ ವಿಸ್ತರಿಸುವುದಾಗಿ ಘೋಷಿಸಿದ್ದು, ಈ ಕಾರ್ಯಕ್ರಮದ ಅಡಿ ಒಟ್ಟಾರೆ ಪ್ರಸ್ತುತ ವರ್ಷದಲ್ಲಿ ಸಾಮರ್ಥ್ಯದ ಟ್ರ್ಯಾಕ್ಟರ್‌ಗಳಿಗೆ ಇದ್ದ ಬೇಡಿಕೆ ಎಷ್ಟು; ವಿತರಿಸಿದ ಟ್ರ್ಯಾಕ್ಟರ್ ಗಳು ಎಷ್ಟು; ಮತ್ತು ನೀಡಿರುವ ಸಹಾಯದನ ಎಷ್ಟು: (ಜಿಲ್ಲಾವಾರು ಮತ್ತು ತಾಲ್ಲೂಕುವಾರು ಸಂಪೂರ್ಣ ವಿವರ ನೀಡುವುದು) | ಪ್ರಸಕ್ತ ಸಾಲಿನ ಆಯವ್ಯಯದಲ್ಲಿ ಸಣ್ಣ ಟ್ರ್ಯಾಕ್ಟರ್ ಗಳಿಗೆ ನೀಡುತ್ತಿದ್ದ ಸಹಾಯಧನವನ್ನು 25-45 PTO HP ಟ್ರ್ಯಾಕ್ಟರ್ ಗಳಿಗೂ ವಿಸ್ತರಿಸಲಾಗಿರುತ್ತದೆ. ಪ್ರಸಕ್ತ ಸಾಲಿನಲ್ಲಿ ಜಿಲ್ಲಾವಾರು ಮತ್ತು ತಾಲ್ಲೂಕುವಾರು 25-45 PTO HP ಟ್ರ್ಯಾಕ್ಟರ್‌ಗಳಿಗೆ ಬಂದ ಬೇಡಿಕೆ, ವಿತರಿಸಿದ ಟ್ರ್ಯಾಕ್ಟರ್ ಮತ್ತು ನೀಡಲಾಗಿರುವ ಸಹಾಯಧನದ ವಿವರಗಳನ್ನು ಅನುಬಂಧ-1ರಲ್ಲಿ ಹಾಗೂ ಸಂಪೂರ್ಣ ವಿವರಗಳನ್ನು ಅನುಬಂಧ-2 ರಲ್ಲಿ ನೀಡಲಾಗಿದೆ. |